# ಸಿಗ್ಮಂಡ್ ಫ್ರಾಯ್ಡ್ (1856- 1939)

## ಇಂದಿರಾ ಜೈಪ್ರಕಾಶ್



***

ಇಪ್ಪತ್ತನೆಯ ಶತಮಾನದ ಚಿಂತಕರಲ್ಲಿ ಪ್ರಮುಖನಾದವನು ಸಿಗ್ಮಂಡ್ ಫ್ರಾಯ್ಡ್. ಕೊಪರ್ನಿಕಸ್ ಮತ್ತು ಡಾರ್ವಿನ್ ರಂತೆ ಪ್ರಪಂಚದ ಇತಿಹಾಸದಲ್ಲಿ ಅತ್ಯಂತ ಪ್ರಭಾವ ಬೀರಿದ ಮೇಧಾವಿಗಳಲ್ಲಿ ಫ್ರಾಯ್ಡ್ ಒಬ್ಬ ಎನ್ನಲಾಗಿದೆ. ಫ್ರಾಯ್ಡ್ ಮನಸ್ಸಿನ ನೆಲೆ, ಮೂಲ, ಹಂತಗಳನ್ನು ಶೋಧಿಸಿ ಮಾನವ ವ್ಯಕ್ತಿತ್ವದ ಬಗ್ಗೆ ಇದ್ದ ಕಲ್ಪನೆಗಳನ್ನೆಲ್ಲಾ ಅಲ್ಲಗೆಳೆದು ಹೊಸ ವಿಚಾರಗಳಿಗೆ ದಾರಿ ಮಾಡಿಕೊಟ್ಟನು. ಇವನ ಕ್ರಾಂತಿಕಾರಿ ಸಿದ್ಧಾಂತಗಳು ಮನೋವಿಜ್ಞಾನ, ಮನೋವೈದ್ಯಕೀಯ, ಸಮಾಜ ಶಾಸ್ತ್ರ, ಕಲೆ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ಅಳಿಸಲಾಗದಂತಹ ಛಾಪು ಉಳಿಸಿವೆ. ಇವನ ಮನೋವಿಶ್ಲೇಷಣಾ ವಿಧಾನ ಮನೋಚಿಕಿತ್ಸಾ ಕ್ಷೇತ್ರಕ್ಕೆ ಒಂದು ಅಮೂಲ್ಯ ಕೊಡುಗೆ.

ಈಗ ಝೆಕೋಸ್ಲಾವಾಕಿಯಾದ ಭಾಗವಾಗಿರುವ ಮೊರಾವಿಯಾದ ಫ್ರೀಬರ್ಗ್‌ನಲ್ಲಿ 1856 ರಲ್ಲಿ ಇವನು ಮಧ್ಯಮ ವರ್ಗದ ಯೆಹೂದಿ ಕುಟುಂಬದಲ್ಲಿ ಜನಿಸಿದ. ವಿಯನ್ನಾದಲ್ಲಿ ವೈದ್ಯಕೀಯ ಪದವಿ ಪಡೆದು ಸಮ್ಮೋಹನವನ್ನು ಮಾನಸಿಕ ರೋಗ ಚಿಕಿತ್ಸೆಗೆ ಬಳಸುತ್ತಿದ್ದ ಶಾರ್ಕೋ, ಲೈಬೋ ಮತ್ತು ಬರ್ನ್‌ಹೈಮ್ ಎಂಬ ವೈದ್ಯರುಗಳ ಬಳಿಯೂ ತರಬೇತಿ ಪಡೆದ. ವಿಯನ್ನಾದಲ್ಲಿ ಖಾಸಗಿ ವೈದ್ಯಕೀಯ ವೃತ್ತಿ ಪ್ರಾರಂಭಿಸಿ ನರರೋಗಗಳ ಚಿಕಿತ್ಸೆಯಲ್ಲಿ ತೊಡಿಗಿದ್ದ ಫ್ರಾಯ್ಡನಿಗೆ ರೋಗಿಗಳ ಅರಿವಿಗೆ ಬಾರದ ಕಾರಣಗಳು ಮಾನಸಿಕ ಚಿಹ್ನೆಗಳನ್ನು ಹುಟ್ಟಿಸುತ್ತವೆ ಎಂಬ ಆಲೋಚನೆ ಮೂಡತೊಡಗಿತು. ಜೋಸಫ್ ಬ್ರುಯರ್ ಎಂಬ ಇವನ ವೈದ್ಯ ಗೆಳೆಯ 'ಭಾವವಿರೇಚನ (Catharsis)' ವಿಧಾನ ಉಪಯೋಗಿಸಿ ತರುಣಿಯೊಬ್ಬಳ ಹಿಸ್ಟೀರಿಯಾ (Hysteria) ಚಿಹ್ನೆಗಳನ್ನು ವಾಸಿಮಾಡಿದ. ಇದರ ವರದಿಯನ್ನು ಇವರಿಬ್ಬರೂ ಸೇರಿ ವೈದ್ಯಕೀಯ ವಿದ್ವತ್ಪತ್ರಿಕೆಯಲ್ಲಿ ಪ್ರಕಟಿಸಿದರು. 'ಅನ್ನಾ, ಓ' ಎಂಬ ಹೆಸರಿನಿಂದ ಕರೆದ ಈ ತರುಣಿಯ ವೃತ್ತಾಂತದಲ್ಲಿ ಮನೋವಿಶ್ಲೇಷಣೆಯ ಆವಿಷ್ಕಾರವಾಯಿತು. ಫ್ರಾಯ್ಡ್‌ನಿಗೆ ಮನೋರೋಗದ ಮೂಲವು ಲೈಂಗಿಕ ಘರ್ಷಣೆಯಲ್ಲಿದೆ

ಎಂಬ ಅನುಮಾನವಿತ್ತು. ರೋಗಿಗಳು ತಮ್ಮ ಮನಸ್ಸಿನಾಳದಲ್ಲಿ ಮುಚ್ಚಿಟ್ಟಿರುವ ಇಂತಹ ವಿಷಯಗಳನ್ನು ಬೆಳಕಿಗೆ ತರಲು 'ಮುಕ್ತ ಸಾಹಚರ್ಯ' ಎಂಬ ವಿಧಾನ ಬಳಸಿದ.

ಫ್ರಾಯ್ಡನ ಪ್ರಕಾರ ಮನುಷ್ಯನ ವರ್ತನೆ ಅವನ ಅರಿವಿಗೆ ಸಿಲುಕದ (ಸುಪ್ತ) ಕಾರಣಗಳಿಂದ ರೂಪುಗೊಂಡಿದೆ. ಹುಟ್ಟಿನಿಂದಲೇ ಹಸಿವು, ನೀರಡಿಕೆ ಮುಂತದ ಪ್ರವೃತ್ತಿಗಳಲ್ಲದೆ ಲೈಂಗಿಕ ಮತ್ತು ಆಕ್ರಮಣ ಪ್ರವೃತ್ತಿ ಜೀವಿಗಳಲ್ಲಿರುತ್ತದೆ. ಮಾನವನ ಕಾಮನೆಗಳ ತೃಪ್ತಿಗೆ ಸಮಾಜ ಅಡ್ಡ ಬರುತ್ತದೆ. ಶಿಷ್ಟ ಸಮಾಜದ ಕಟ್ಟುಪಾಡುಗಳ ಪರಿಧಿಯೊಳಗೆ ನಮ್ಮ ಮೂಲಪ್ರವೃತ್ತಿಗಳನ್ನು ತೃಪ್ತಿಪಡಿಸಿಕೊಳ್ಳುವ ಪ್ರಯತ್ನಗಳ ನೆಲೆಯಲ್ಲಿ ವ್ಯಕ್ತಿತ್ವದ ರಚನೆಯಾಗುತ್ತದೆ. ವ್ಯಕ್ತಿತ್ವದ ಕೆಲವು ಭಾಗಗಳು ಮಾತ್ರ ನಮ್ಮ ಅರಿವಿಗೆ ಬರುತ್ತವೆ. ನಮ್ಮ ಅನುಭವಗಳು ಮೂರು ಹಂತಗಳಲ್ಲಿ ಇರುತ್ತವೆ. ನಮ್ಮ ಅರಿವಿಗೆ ಬರುವ ಮಾಹಿತಿ, ಸ್ಮೃತಿಗಳು ಪ್ರಬುದ್ಧ ಚೇತನ/ ಪ್ರಜ್ಞೆ(Conscious) ದಲ್ಲಿರುತ್ತವೆ. ಈ ಕ್ಷಣದಲ್ಲಿ ನಮ್ಮ ಅರಿವಿನಲ್ಲಿ ಇರದ, ಬೇಕಿದ್ದಲಿ ನೆನಪಿಸಿಕೊಳ್ಳಬಹುದಾದ ವಿಷಯಗಳು ಪೂರ್ವಪ್ರಬುದ್ಧ ಚೇತನ (Pre Conscious) ದಲ್ಲಿರುತ್ತವೆ. ಸುಪ್ತ ಬಯಕೆಗಳು, ಶೈಶವದ ಘಟನೆಗಳು, ಆವೇಗಗಳು, ಅಸಹ್ಯ ಎನಿಸುವ ನೆನಪುಗಳು ಸುಪ್ತಚೇತನ (Unconscious) ದಲ್ಲಿ ಅದುಮಿಡಲ್ಪಟ್ಟಿರುತ್ತವೆ. ಸುಪ್ತಚೇತನವನ್ನು ಅರ್ಥಮಾಡಿಕೊಳ್ಳಲು ಕನಸುಗಳು ರಾಜಮಾರ್ಗ. ಸುಪ್ತಚೇತನ ಅಹಂನ ನಿಯಂತ್ರಣದಿಂದ ಹೊರಬೀಳಲು ಸದಾ ಯತ್ನಿಸುತ್ತಿರುತ್ತದೆ. ಬಾಯಿತಪ್ಪುಗಳು ಮತ್ತು ಬರಹದಲ್ಲಿ ಮಾಡುವ ಪ್ರಮಾದಗಳು(Freudian Slips), ಸುಪ್ತಚೇತನದ ಒಳಾಂಶವನ್ನು, ಅಹಂನ ಕಣ್ತಪ್ಪಿಸಿ ಪ್ರಕಟಗೊಳಿಸುವ ಜಾಣ ತಂತ್ರಗಳು.

ವ್ಯಕ್ತಿತ್ವದಲ್ಲಿ ಮೂರು ಘಟಕಗಳಿವೆ. ಇದಂ (Id), ಅಹಂ (Ego) ಮತ್ತು ಅಧಿ ಅಹಂ (Super Ego). ಇದಂ ಸುಪ್ತಚೇತನದ ಮೂಲ. ಲೈಂಗಿಕ ಮತ್ತು ಆಕ್ರಮಣ ಪ್ರವೃತ್ತಿಗಳ ಆಗರ. ಇದು ಸ್ವಾರ್ಥಿ ಮತ್ತು ತನ್ನ ಬಯಕೆಗಳ ಪೂರೈಕೆಗೆ ಹಾತೊರೆಯುತ್ತಿರುತ್ತದೆ. ಇದು ಅನುಸರಿಸುವುದು 'ಸುಖ ತತ್ವ (Pleasure Principle)'. ಇಂತಹ ಸಂವೇಗಗಳ ಮುದ್ದೆಯಾಗಿರುವ ಶಿಶು ಸಮಾಜದ ಕಟ್ಟುಪಾಡುಗಳನ್ನು ಎದುರಿಸುವಾಗ ಅಹಂ ಬೆಳೆಯುತ್ತದೆ. ಅಹಂ ಅನುಸರಿಸುವುದು 'ವಾಸ್ತವತಾ ತತ್ವ (Reality principle)'. ಮೂರರಿಂದ ಆರುವರ್ಷಗಳ ನಡುವೆ ಅದಿ ಅಹಂನ ರಚನೆಯಾಗುತ್ತದೆ. ಮಗು, ಪಾಲಕರ ಶಿಸ್ತು, ನೈತಿಕಮೌಲ್ಯಗಳು, ಸಾಮಾಜಿಕ ನಿಯಮಗಳನ್ನು 'ನೈತಿಕ ತತ್ವ (Moral principle)'ದ ಆಧಾರದ ಮೇಲೆ ಮೈಗೂಡಿಸಿಕೊಳ್ಳುವುದು. ಮಗು ಮಾಡುವ 'ತಪ್ಪು'ಗಳಿಗೆ ಶಿಕ್ಷೆಯಾಗುವುದರಿಂದ 'ಮನಸ್ಸಾಕ್ಷಿ (Conscience) ಹುಟ್ಟುತ್ತದೆ 'ಒಳ್ಳೆಯ' ವರ್ತನೆಗೆ ಸಿಗುವ ಹೊಗಳಿಕೆ, ಪ್ರೀತಿಯಿಂದ 'ಅಹಂ ಆದರ್ಶದ (Ego Ideal)' ರಚನೆಯಾಗುತ್ತದೆ.

ಫ್ರಾಯ್ಡ್ ಮೂಲಪ್ರವೃತ್ತಿಯೇ ವ್ಯಕ್ತಿತ್ವದ ಮುಖ್ಯ ಚಾಲಕ ಎಂದು ನಂಬಿದ್ದ. 'ಕಾಮೇಚ್ಛೆ (Libido)' ಮೂಲ ಪ್ರವೃತ್ತಿಯಲ್ಲಿರುವ ಶಕ್ತಿ. ಮೂಲ ಪ್ರವೃತ್ತಿಗಳಲ್ಲಿ ಎರಡು ವಿಧ- ಎರೋಸ್ (Eros) ಎಂದರೆ ಜೀವಮೂಲ ಪ್ರೇರಣೆ /ಪ್ರವೃತ್ತಿ (Life Instinct) ಮತ್ತು ಥನಟಾಸ್ (Thanatos) 'ಮರಣ ಮೂಲ ಪ್ರೇರಣೆ (Death Instinct). ಮೂಲಪ್ರೇರಣೆಗಳ ಅಂತರಕ್ರಿಯೆಯಿಂದ ಒತ್ತಡ ಉಂಟಾಗುತ್ತದೆ. ಲೈಂಗಿಕತೆ ಶೈಶವದಲ್ಲೇ ಮೂಡಿದ್ದು ಐದು ಹಂತಗಳ ಮನೋಲೈಂಗಿಕ (Psycho sexual) ವಿಕಾಸದಲ್ಲಿ ಲಿಬಿಡೋ ದೇಹದ ವಿವಿಧ ಭಾಗಗಳಲ್ಲಿ ಕೇಂದ್ರೀಕೃತವಾಗುತ್ತದೆ. ಮೊದಲನೆಯದು 'ಬಾಯಿ (oral) ಹಂತ'. ಹುಟ್ಟಿನಿಂದ 18 ತಿಂಗಳ ಕಾಲ ಮಗುವಿಗೆ ಚೀಪುವುದು, ಕಚ್ಚುವುದು ಮುಂತಾದ ಬಾಯಿಗೆ ಸಂಬಂಧಿಸಿದ ಕ್ರಿಯೆಗಳಿಂದ ಕಾಮೇಚ್ಛೆ ತೃಪ್ತಿಗೊಳ್ಳುತ್ತದೆ. ಎರಡರಿಂದ ಮೂರನೆಯ ವರ್ಷಗಳಲ್ಲಿ ಮಗುವಿನ ಗಮನ ಗುದದ್ವಾರದ ಕಡೆ ಹೊರಳುತ್ತದೆ.

ಇದು 'ಗುದ (Anal) ಹಂತ' ಮಲಮೂತ್ರ ವಿಸರ್ಜನೆಯ ಸಂವೇದನೆಗಳು, ಪಾಲಕರು ಶೌಚಕ್ಕೆ ಸಂಬಂಧಿಸಿದ ಸರಿಯಾದ ಅಭ್ಯಾಸಗಳನ್ನು ಕಲಿಸಲು ಮಾಡುವ ಒತ್ತಾಯಗಳು ವ್ಯಕ್ತಿತ್ವದ ಮೇಲೆ ಪ್ರಭಾವ ಬೀರುತ್ತವೆ.

ನಾಲ್ಕು ಮತ್ತು ಐದನೆ ವರ್ಷದ ಹೊತ್ತಿಗೆ ಮಕ್ಕಳಿಗೆ ತಮ್ಮ ಜನನಾಂಗಗಳ ಬಗ್ಗೆ ಅರಿವು ಉಂಟಾದಾಗ 'ಶಿಶ್ನ(Phallic) ಹಂತ' ಪ್ರಾರಂಭವಾಗುತ್ತದೆ. ಹೆಣ್ಣು-ಗಂಡು ಮಕ್ಕಳ ದೇಹ ರಚನೆಯಲ್ಲಿರುವ ವ್ಯತ್ಯಾಸಗಳು ಕುತೂಹಲ ಹುಟ್ಟಿಸುತ್ತವೆ. ತಂದೆ-ತಾಯಿಯರ ನಡುವಿನ ಲೈಂಗಿಕ ಸಂಬಂಧದ ಅಸ್ಪಷ್ಟ ಅರಿವೂ ಆಗುತ್ತದೆ. ಬಾಲಕನಿಗೆ ತಂದೆ ತನ್ನ ಪ್ರತಿಸ್ಪರ್ಧಿ, ಅವನನ್ನು ತಾಯಿಯಿಂದ ದೂರ ಮಾಡಿ ತಾನು ಅವಳನ್ನು ಹೊಂದಬೇಕೆಂಬ ಹಂಬಲ ಉಂಟಾಗುತ್ತದೆ. ಇದು (Oedipus Complex) ಮಾತೃಗಮನ ಗ್ರಂಥಿ. ತಂದೆ ತನ್ನ ಶಿಶ್ನಗಳನ್ನು ಕತ್ತರಿಸಬಹುದೆಂಬ ಆತಂಕ (ಶಿಶ್ನಲೋಪ ಭಯ -castration Anxiety) ಮತ್ತು ಬಾಲಕಿ ಶಿಶ್ನವನ್ನು ಕಳೆದುಕೊಂಡಿರಬಹುದು ಎಂಬ ನಂಬಿಕೆಗಳಿರುತ್ತವೆ. ಇವುಗಳನ್ನು ಸುಪ್ತಚೇತನದೊಳಗೆ ತಳ್ಳಿ, ತಂದೆಯೊಡನೆ ಅನನ್ಯತೆ ಸಾಧಿಸುವುದರಲ್ಲಿ ಬಾಲಕನ ವ್ಯಕ್ತಿತ್ವ ರೂಪುಗೊಳ್ಳುತ್ತದೆ. ಬಾಲಕಿ ತನಗೆ ಶಿಶ್ನ ಇಲ್ಲದಿರುವುದರ ಬಗ್ಗೆ ಮತ್ಸರ (Penis Envy) ಉಂಟಾಗಿ ಇದಕ್ಕೆ ತಾಯಿಯೇ ಕಾರಣಳು ಎಂದು ಕುಪಿತಳಾಗುತ್ತಾಳೆ. ತಂದೆಯ ಬಗ್ಗೆ ಒಲವಿದ್ದು -ಪಿತೃಗಮನ ಗ್ರಂಥಿ( Electra Complex) ಅದನ್ನು ನಿರೋಧಿಸಿಕೊಂಡು ತಾಯಿಯಂತಾಗಲು ಪ್ರಯತ್ನಿಸುತ್ತಾಳೆ. ತನಗಿಲ್ಲದ ಶಿಶ್ನಕ್ಕೆ ಬದಲಾಗಿ ಮಕ್ಕಳನ್ನು ಪಡೆಯಲು ಪ್ರಯತ್ನಿಸುತ್ತಾಳೆ.

5-6 ವರ್ಷಗಳಲ್ಲಿ ಇಂತಹ ಘರ್ಷಣೆಗಳಿಂದ ಮಗು ಮುಕ್ತವಾಗಿ ಕೆಲವರ್ಷ ಶಾಂತವಾದ ಅವ್ಯಕ್ತಾವಧಿ (Latency Period) ಯಲ್ಲಿ ಕಾಮವಾಸನೆ ಜಡವಾಗುತ್ತದೆ. ಹರೆಯದಲ್ಲಿ ಮತ್ತೆ ದೈಹಿಕ ಬದಲಾವಣೆಗಳು ಲಿಬಿಡೋವನ್ನು ಲೈಂಗಿಕ ಅಂಗಗಳ ಕಡೆ ತಿರುಗಿಸುತ್ತವೆ. ಇದು 'ಜನನೇಂದ್ರಿಯ (Genital)ಹಂತ'. ಇಲ್ಲಿಯವರಗೂ ಕಾಮೇಚ್ಛೆಯ ಮುನ್ನಡೆ ಸರಿಯಾಗಿದ್ದರೆ ವ್ಯಕ್ತಿಗೆ ವಿರುದ್ಧಲಿಂಗಿಯ ವ್ಯಕ್ತಿಯೆಡೆ ಆಕರ್ಷಣೆ ಉಂಟಾಗುತ್ತದೆ. ದೇಹದ ಮಿಕ್ಕ ಅಂಗಗಳು ಲೈಂಗಿಕತೆಯಲ್ಲಿ ತಮ್ಮ ಪ್ರಾಧ್ಯಾನತೆ ಕಳೆದುಕೊಳ್ಳುತ್ತವೆ. ಯಾವುದೆ ಹಂತದಲ್ಲಿ ತೊಂದರೆಯಾಗಿ ಲಿಬಿಡೋ ಮುಂದಿನ ಹಂತಕ್ಕೆ ಸಾಗದೆ ಅಲ್ಲೇ ಸ್ಥಿರ(Fixation)ವಾದರೆ, ವ್ಯಕ್ತಿತ್ವ ವಿಕಾಸ ಕುಂಠಿತವಾಗುತ್ತದೆ. ಈ ಸಿದ್ಧಾಂತವನ್ನು ಆಧರಿಸಿರುವ ಮನೋಚಿಕಿತ್ಸೆಯೇ ಮನೋವಿಶ್ಲೇಷಣೆ.

ವ್ಯಕ್ತಿತ್ವದಲ್ಲಿ ಅತಂಕ ಮತ್ತು ಅಹಂ ರಕ್ಷಣಾ ತಂತ್ರಗಳ ಪಾತ್ರ ಮುಖ್ಯ. ಅಹಂನ ಸಾಮರ್ಥ್ಯವನ್ನು ಮೀರಿಸುವ ಅನೇಕ ಸಂವೇದನೆಗಳು ವ್ಯಕ್ತಿಯ ಹೊರಗೂ ಒಳಗೂ ಇರುತ್ತವೆ. ಇಂತಹ ಸಂದರ್ಭದಲ್ಲಿ ಆತಂಕ ಕಾಣಿಸಿಕೊಳ್ಳುತ್ತದೆ. 'ವಾಸ್ತವ ಆತಂಕ (Reality Anxiety)' ಜೀವಕ್ಕೆ ಅಪಾಯ ಇರುವ ಸನ್ನಿವೇಶಗಳಲ್ಲಿ ಉಂಟಾಗುತ್ತದೆ. 'ನೈತಿಕ ಆತಂಕ (Moral Anxiety)' ನಾಚಿಕೆ ತರುವ ಸನ್ನಿವೇಶಗಳಲ್ಲಿ ಮನಃಸಾಕ್ಷಿಯ ಪ್ರಭಾವದಿಂದ ಹುಟ್ಟುತ್ತದೆ. 'ಮನೋವಿಕ್ಷಿಪ್ತ ಆತಂಕ (Neurotic Anxiety)' ಸುಪ್ತಚೇತನದಲ್ಲಿರುವ ವಸ್ತು ಹತೋಟಿ ಮೀರಿ ಹೊರಬಂದು ನಮ್ಮಿಂದ ನಿಷೇಧಿತ ಕೆಲಸ ಮಾಡಿಸಬಿಡಬಹುದು ಎಂಬ ಭಯದಿಂದ ಹುಟ್ಟುತ್ತದೆ. ಆತಂಕ ಸಹಜವಾಗಿಯೇ ಅಹಿತಕರವಾಗಿರುತ್ತದೆ. ನಮ್ಮ ಆತ್ಮ ಸಮ್ಮಾನವನ್ನು ಉಳಿಸಿಕೊಳ್ಳಲು ಮತ್ತು ಮಾನಸಿಕ ಸುಸ್ಥಿತಿ ಕಾಪಾಡಲು ಅಹಂ ರಕ್ಷಣಾತಂತ್ರಗಳು (Ego Defence) ನೆರವಾಗುತ್ತವೆ. 'ನಿರಾಕರಣೆ' 'ನಿರೋಧ' 'ದಮನ' ಮುಂತಾದ ಅನೇಕ ತಂತ್ರಗಳನ್ನು ಜನರು ಬಳಸುತ್ತಾರೆ. ಫ್ರಾಯ್ಡ್ ನ ಪ್ರಕಾರ ಮಾನಸಿಕ ರೋಗಗಳಿಗೆ ಬಾಲ್ಯದ ಅನುಭವಗಳು ಮತ್ತು ಭಾವಗ್ರಂಥಿಗಳು ಕಾರಣ.

ಫ್ರಾಯ್ಡ್ ಅನೇಕ ಗೌರವಗಳು ಮತ್ತು ಪದವಿಗಳಿಗೆ ಪಾತ್ರನಾಗಿದ್ದ. ಸಾಹಿತ್ಯಕ್ಕೆ ಸಲ್ಲುವ ನೊಬೆಲ್ ಬಹುಮಾನಕ್ಕೆ ಸೂಚಿತನಾಗಿದ್ದರೂ ಅದು ಅವನಿಗೆ ಲಭಿಸಲಿಲ್ಲ. 1901 ರಲ್ಲಿ ತನ್ನ ವಿಚಾರಗಳ ಪ್ರಚಾರಕ್ಕೆ ನಿಯತಕಾಲಿಕವನ್ನು

ಪ್ರಾರಂಭಿಸಿದ. 1910 ರಲ್ಲಿ ಅಂತರಾಷ್ಟ್ರೀಯ ಸೈಕೋಅನಾಲಿಟಿಕಲ್ ಅಸೋಶಿಯೇಶನ್ (Psychoanalytical Association) ಪ್ರಾರಂಭವಾಯಿತು. ಇವನೊಡನಿದ್ದ ಯೂಂಗ್ ಮತ್ತು ಆಡ್ಲರ್ ಇವನ ವಿಚಾರಗಳನ್ನು ಒಪ್ಪದೆ ತಮ್ಮದೇ ಪಂಥ ಸ್ಥಾಪಿಸಿದರು. ನವಫ್ರಾಯ್ಡ್ ಪಂಥೀಯರು ಇವನ ಸಿದ್ಧಾಂತಕ್ಕೆ ಸಾಮಾಜಿಕ ಆಯಾಮವನ್ನು ಆಳವಡಿಸಿದರು. ಫ್ರಾಯ್ಡ್ 1986ರಲ್ಲಿ ಮಾರ್ಥಾ ಬೆರ್ನಾಸಳನ್ನು ವಿವಾಹವಾಗಿ ಆರು ಮಕ್ಕಳನ್ನು ಪಡೆದಿದ್ದ. ಇವನ ಕಿರಿಯಮಗಳು ಅನ್ನಾ ಫ್ರಾಯ್ಡ್ ವಿವಾಹವಾಗದೆ ತಂದೆಯೊಡನಿದ್ದು ಅವನ ಕೆಲಸವನ್ನು ಮುಂದುವರಿಸಿದಳು. ಕ್ಯಾನ್ಸರಿನಿಂದ ಬಳಲುತ್ತಿದ್ದವನು ನಾಜಿಗಳ ಕಿರುಕುಳದಿಂದ ತಪ್ಪಿಸಿಕೊಂಡು ಲಂಡನ್ ನಗರದಲ್ಲಿ ತನ್ನ ಕೊನೆಗಾಲ ಕಳೆದ. ಸುಮಾರು 30 ವರ್ಷಗಳು ತನ್ನ ವಿಚಾರಗಳ ಬಗ್ಗೆ ಇವನು ಬರೆದದ್ದು ಜನಪ್ರಿಯವಾದಷ್ಟೇ ಟೀಕೆ ಮತ್ತು ಅವಹೇಳನಕ್ಕೂ ಪಾತ್ರವಾದವು. ಅರ್ನೆಸ್ಟ್ ಜೋನ್ಸ್ ಮತ್ತು ಅನ್ನಾ ಫ್ರಾಯ್ಡ್ ಇವನ ಎಲ್ಲಾ ಬರಹಗಳನ್ನು ಸಂಪಾದಿಸಿ “ಫ್ರಾಯ್ಡನ ಜೀವನ ಮತ್ತು ಬರಹಗಳು’ ಎಂಬ 24 ಹೊತ್ತಿಗೆಗಳನ್ನು ಪ್ರಕಟಿಸಿದರು. ಫ್ರಾಯ್ಡನಷ್ಟು, ಕವಿ-ಕಲಾವಿದರಲ್ಲದೆ ಸಾಮಾನ್ಯ ಜನರ ಕಲ್ಪನೆಯನ್ನು ಕೆರಳಿಸಿದ ಮನೋವಿಜ್ಞಾನಿ ಇನ್ನೊಬ್ಬರಿರಲಾರರು.

***